


# ಜ್ಯೋತಿಷ ಮಿತ್ರ

## ಆನ್‌ಲೈನ್ ದಿನಪತ್ರಿಕೆ

www.jyothishamithra.com

ಸಂಚಿಕೆ : 1164 02-11-2021 ಮಂಗಳವಾರ

ಪ್ಲವಸಂವತ್ಸರ ದಕ್ಷಿಣಾಯಣ ಶರತ್‌ಋತು
ಅಶ್ವಯುಜಮಾಸ ಕೃಷ್ಣಪಕ್ಷ

| ನಿತ್ಯ ಪಂಚಾಂಗ | ಸುಜ್ಞಾನ |
|---|---|
| ತಿಥಿ : ದ್ವಾದಶೀ (ಗಂಟೆ 11.30ರ ವರೆಗೆ)<br>ನಕ್ಷತ್ರ : ಉತ್ತರಾ (ಗಂಟೆ 11.43ರ ವರೆಗೆ)<br>ರಾಹುಕಾಲ : (ಗಂಟೆ 03.09 PM - 04.36 PM ವರೆಗೆ)<br>ಗುಳಿಕಕಾಲ : (ಗಂಟೆ 12.14 PM - 01.41 PM ವರೆಗೆ) | ನಗುತ್ತಿರಬೇಕು ನಿಜ, ಆದರೆ ಯಾರನ್ನೋ ನೋಡಿ ನಗುವುದಕ್ಕಿಂತ, ಎಲ್ಲರೊಡನೆ ಬೆರೆತು ನಗುತ್ತ ನಗಿಸುವ ಸುಖ ಹೆಚ್ಚಿನದು. |




**ಪರೋಪಕರಣಂ ಯೇಷಾಂ ಜಾಗರ್ತಿ ಹೃದಯೇ ಸತಾಮ್ ।**
**ನಶ್ಯಂತಿ ವಿಪದಸ್ತೇಷಾಂ ಸಂಪದಃ ಸ್ಯುಃ ಪದೇ ಪದೇ ॥**

ಯಾರ ಹೃದಯದಲ್ಲಿ ಪರೋಪಕಾರ ಬುದ್ಧಿ ಜಾಗೃತವಾಗಿದೆಯೋ ಅವರು ಯಾವಾಗಲೂ ಒಳ್ಳೆಯದನ್ನೇ ಪಡೆಯುತ್ತಾರೆ. ಅವರ ಎಲ್ಲಾ ಆಪತ್ತುಗಳೂ ತಾವಾಗಿಯೇ ನಿವಾರಣೆಯಾಗುತ್ತವೆ. ಅವರ ಸಂಪತ್ತು ದಿನೇ ದಿನೇ ವೃದ್ಧಿಸುತ್ತದೆ.

ಪರೋಪಕಾರ ಒಳ್ಳೆಯದು. ಅದು ಎಲ್ಲರಲ್ಲೂ

ಇರಬೇಕಾದ ಗುಣ. ಆದರೆ, ಅದೊಂದರಿಂದಲೇ ಎಲ್ಲವೂ ಲಭಿಸುತ್ತದೆ ಎಂಬ ಚಾಣಕ್ಯನ ಮಾತನ್ನು ನಂಬುವುದು ಕಷ್ಟ. ಇಂದಿನ ಕಾಲದಲ್ಲಿ ಪರೋಪಕಾರ ಅತಿಯಾದರೆ ಅದರಿಂದ ನಮಗೇ ನಷ್ಟ.

# ಸ್ತ್ರೀ ಜಾತಕ ವಿಮರ್ಶೆ

# ವೈವಾಹಿಕ ವಿಚಾರ

ಇದು ಮಿಥುನ ಲಗ್ನದ ಸ್ತ್ರೀ ಜಾತಕ. ಲಗ್ನಾಧಿಪತಿಯಾದ ಬುಧ ವಿವಾಹ ಸ್ಥಾನವಾದ ಸಪ್ತಮದಲ್ಲಿ ಪಾಪಗ್ರಹರಾದ ರವಿ-ಶನಿಯೊಂದಿಗೆ ಸ್ಥಿತನಾಗಿರುವನು. ಸಪ್ತಮಾಧಿಪತಿ ಯಾದ ಗುರು ಕೇಂದ್ರ ಸ್ಥಾನವಾದ ದಶದಲ್ಲಿರುವುದು ಶುಭವೇ ಆದರೂ ಗುರುವಿಗಿರುವ ರಾಹು-ಮಾಂದಿಯೋಗ

ಶುಭವಲ್ಲ. ವಿವಾಹಕಾರಕನಾದ ಶುಕ್ರನು ದುಸ್ಥಾನವಾದ ಅಷ್ಟಮದಲ್ಲಿ (ದುಃಖಕಾರಕನಾದ ಶನಿಯ ಕ್ಷೇತ್ರದಲ್ಲಿ) ಸ್ಥಿತನಾಗಿರುವನು.

| | | | |
|---|---|---|---|
| ಗುರು<br>ರಾಹು<br>ಮಾಂದಿ | ಚಂದ್ರ | | ಲಗ್ನ |
| | 30-12-1987<br>5.30 PM | | |
| ಶುಕ್ರ | **ಗ್ರಹ ಕುಂಡಲಿ** | | |
| ರವಿ ಬುಧ<br>ಶನಿ | ಕುಜ | | ಕೇತು |

ಸಪ್ತಮದಲ್ಲಿ ರವಿ ಇರುವ ಸ್ತ್ರೀ ಜಾತಕದಲ್ಲಿ ಸ್ತ್ರೀಯು ಕಠಿನ ಸ್ವಭಾವದವಳಾಗಿರುವಳು. ಗಂಡನ ವೈರಾಗ್ಯವನ್ನು ಹೊಂದುವಳು. ಸಪ್ತಮದ ರವಿಯೊಂದಿಗೆ ಪಾಪಗ್ರರಿದ್ದರೆ

ಸಂಸಾರಿಕ ಸುಖವಿರದು.

ಪತಿಕಾರಕನಾದ ಕುಜನು ಶತ್ರುಭಾವದಲ್ಲಿ ಸ್ಥಿತನಾಗಿರುವನು. ಆತನಿಗೆ ಬಲಹೀನ ಗುರುವಿನ ದೃಷ್ಟಿಯಿದೆ.

| | | | |
|---|---|---|---|
| | ಶನಿ | ಶುಕ್ರ | |
| ಗುರು<br>ಕೇತು | | | ಕುಜ |
| | **ನವಾಂಶ ಕುಂಡಲಿ** | | ರವಿ ರಾಹು |
| | ಲಗ್ನ | ಚಂದ್ರ | ಬುಧ<br>ಮಾಂದಿ |

ನವಾಂಶ ಕುಂಡಲಿಯಲ್ಲಿ ಸಪ್ತಮಾಧಿಪತಿಯಾದ ಶುಕ್ರ

ಸಪ್ತಮಾಧಿಪತಿಯಾಗಿ ಸಪ್ತಮದಲ್ಲಿರುವನು. ಆದರೆ ವೃಶ್ಚಿಕ ಲಗ್ನಕ್ಕೆ ಶುಕ್ರನು ವ್ಯಯಾಧಿಪತಿಯೂ ಆಗಿದ್ದಾನೆ. ಪತಿಕಾರಕನಾದ ಕುಜನು ನೀಚನಾಗಿರುವನು.

ಪ್ರಸ್ತುತ ರಾಹುದೆಶೆಯಲ್ಲಿ ಗುರುಭುಕ್ತಿ ನಡೆಯುತ್ತಿದೆ **( 02-05-2020 ರಿಂದ 26-09-2022ರ ವರೆಗೆ ಗುರುಭುಕ್ತಿ).** ಜನ್ಮ ಕುಂಡಲಿಯಲ್ಲಿ ವಿವಾಹ ಸ್ಥಾನಾಧಿಪತಿಯಾದ ಗುರುವಿನೊಂದಿಗೆ ರಾಹು ಇರುವುದರಿಂದ ವಿವಾಹ ವಿಚ್ಛೇದನ ಹಂತಕ್ಕೆ ಬಂದಿದೆ.

ಜನ್ಮ ಕುಂಡಲಿಯಲ್ಲಿ ಸಪ್ತಮದಲ್ಲಿ ಪಾಪಗ್ರಹರು, ಸಪ್ತಮಾಧಿಪತಿ ಗುರುವಿಗೆ ರಾಹು-ಮಾಂದಿಯೋಗ, ವಿವಾಹಕಾರಕನಾದ ಶುಕ್ರನು ಅಷ್ಟಮದಲ್ಲಿರುವುದು, ಪತಿಕಾರಕನಾದ ಕುಜನು ಶತ್ರುಭಾವದಲ್ಲಿರುವುದು ವೈವಾಹಿಕ ಸುಖದಿಂದ ವಂಚಿತಳನ್ನಾಗಿ ಮಾಡಿದೆ.

## ಜ್ಯೋತಿಷ ಮಿತ್ರ ಆನ್ಲೈನ್ ದಿನಪತ್ರಿಕೆ


ಗೌರವ ಸಂಪಾದಕರು : ಜೀವನ್ ಉಳ್ಳಾಲ್

ಸಂಪಾದಕರು : ಶ್ರೀಷ ಎಸ್.

ಕಚೇರಿ ವಿಳಾಸ : ಹತ್ವಾರ್ ಕಾಂಪ್ಲೆಕ್ಸ್, ಹೊಸಬೆಟ್ಟು, ಮಂಗಳೂರು - 575019.

PH : 9986671473 / 9535283535

jmonline@gmail.com    www.jyothishamithra.com